ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ 2021

# ಯಾಕೀ ಕತೆ ಹೀಂಗಾತ್?

ಅರೆಬಾಸೆ ಕವಿತೆಗ

ಕುತ್ಯಾಳ ನಾಗಪ್ಪ ಗೌಡ (ಕಿರಣ)

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಮಡಿಕೇರಿ

Decennial Year Publication Series 2021

**ಯಾಕೀ ಕತೆ ಹೀಂಗಾತ್ ಅರೆಬಾಸೆ ಕವಿತೆಗ**
**Yaakee kate Hingat?**
Collection of Poems Arebaase Language
Written by
**Kutyala Nagappa Gowda (Kirana)**
Kirana Kuteera, Sullia - 574 239 Mobile : 94482 97221 / 76187 53221
Email: kngkirana@gmail.com



ಪ್ರಕಟಣೆ :
**ರಿಜಿಸ್ಟ್ರಾರ್**
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಪುಸ್ತಕ ದೊರೆಯುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪ ಬಿಲ್ಡಿಂಗ್, ರಾಜಸೀಟ್ ರಸ್ತೆ, ಮಡಿಕೇರಿ
ದೂ: 08272–223055, ಮೊ : 6362522677
arebaseacademy@gmail.com, www.arebasheacademy.gov.in

ಪ್ರಕಟಣೆಯ ವರ್ಷ : 2021


ಪುಟಗಳು : 36
ಬೆಲೆ : ರೂ. 45
ಪ್ರತಿಗಳು : 300

ಆಕಾರ : ಡೆಮಿ 1/8
ಕಾಗದ : 80 ಜಿಎಸ್‌ಎಂ ಮ್ಯಾಪ್ಲಿತೋ
ಮುಖಪುಟ ವಿನ್ಯಾಸ : **ದಿನೇಶ್ ಹೊಳ್ಳ**

ಪುಟವಿನ್ಯಾಸ ಮತ್ತು ಮುದ್ರಣ
**ಆಕೃತಿ ಪ್ರಿಂಟ್ಸ್**
ಲೈಟ್‌ಹೌಸ್ ಹಿಲ್ ರಸ್ತೆ, ಮಂಗಳೂರು – 575 001
ದೂ: 0824 2972002

# ಅಧ್ಯಕ್ಷರ ಮಾತು

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಪುಸ್ತಕ ಪ್ರಕಟಣೆಯ ಯೋಜನೆ ಅಡಿಲಿ ಖ್ಯಾತ ಕವಿಗಳಾದ ಕುತ್ಯಾಳ ನಾಗಪ್ಪ ಗೌಡ (ಕಿರಣ)ರ 'ಯಾಕೀ ಕತೆ ಹಿಂಗಾತ್' ಕವನ ಸಂಕಲನ ಬರ್ತಿರುದು ನಿಜಕ್ಕೂ ಕುಸಿ ಮತ್ತೆ ಹೆಮ್ಮೆಯ ಸಂಗತಿ. ಯಾಕೇತೇಳಿರೆ ಒಂದು ರೀತಿಲಿ ಕಾವ್ಯದ ಹೊಸ ಪ್ರಯೋಗನ ನಾವಿಲ್ಲಿ ಕಾಂಬಕೆ ಸಾಧ್ಯ. ರೂಪಕಗಳ ಮೂಲಕ ಪ್ರತಿಮೆಗಳ ಮೂಲಕ ಬರೆಯುವ ಕಲೆಗಾರಿಕೆನ ನಾವು ಇವರ ಕವಿತೆಗಳ್‌ಲಿ ಕಾಣಕ್. ಸರಳವಾಗಿ ಕಾಯವ ಇಲ್ಲಿನ ಕವಿತೆಗ ನಾವು ಗಂಭೀರವಾಗಿ ಯೋಚಿಸುವಾಂಗೆ ಮಾಡಿವೆ. ಸೂಚ್ಯವಾಗಿ ಕಡಿಮೆ ಪದಗಳಲಿ ಹೆಚ್ಚ್ ಅರ್ಥಕ್ಕೆ ದಕ್ಕುವ ವಿಶಿಷ್ಟ ಶಕ್ತಿ ಇಲ್ಲಿನ ಕವಿತೆಗಳ್‌ಲಿ ಉಟ್ಟು.

ಇಂಗ್ಲಿಷ್ ಕವಿತೆಗಳ ಪ್ರಬಾವ ಆಗಿರ್‌ದು ವಚನ, ಕೀರ್ತನೆಗಳ ಪ್ರಭಾವ ಇಲ್ಲಿನ ಕವಿತೆಗಳ ಮೇಲಾವುಟು. ಆದರೆ ಅದನ್ನೆಲ್ಲಾ ನಮ್ಮ ಅರೆಬಾಸೆ ಪರಿಸರಕ್ಕೆ ಒಗ್ಗುವ ರೀತಿಲಿ ಬರೆಯುದು ಅಷ್ಟೊಂದು ಸುಲಭ ಅಲ್ಲ. ಆದರೆ ಇಲ್ಲಿ ಈ ಪ್ರಯತ್ನಲಿ ಗೆಲುವು ಸಾಧಿಸಿಯೊಳೊ. ಇನ್ನ್ ಪುರಾಣದ ಪಾತ್ರಗಳ್‌ನ ಅಚಾನಕ್ ಆಗಿ ಇಲ್ಲಿ ವರ್ತಮಾನಕ್ಕೆ ತಂದ್ ನಿಲ್ಲಿಸುವೆ, ಇವೆಲ್ಲಾ ಕವಿತೆಗಿರುವ ಶಕ್ತಿ ಮತ್ತೆ ಸಾಧ್ಯತೆಗ. ಈ ರೀತಿಯ ಬೇರೆ ಬೇರೆ ಸಾಧ್ಯತೆಗಳತ್ತ ನಮ್ಮ ಅರೆಬಾಸೆಯ ಕವಿಗ ಯೋಚಿಸಿರೆ ನಮ್ಮ ಬಾಸೆಗೆ ಮತ್ತಷ್ಟು ಬಲ ಬಂದ್ ಗಟ್ಟಿ ಆದೆ. ಸುತ್ತ ಮುತ್ತ ಕಾಣುವ ಕಾಗೆ, ಗೂಬೆ, ಕುದ್ಕ ಇವುಗಳನ್ನು ಇಟ್ಟ್‌ಕಂಡೇ ಬೊದ್ಕ್‌ನ ಹೊಸ ಸಂದೇಶದ ಇಲ್ಲಿನ ಕವಿತೆಗಳಲಿ ಕಾಂಬದ್. ಈ ರೀತಿಯ ಚಿಂತನೆ ಇರ್‌ವ ಕವಿತೆಗ ಮತ್ತಷ್ಟು ಅರೆಬಾಸೆಗೆ ಬರೋಕು.

**ಲಕ್ಷ್ಮೀನಾರಾಯಣ ಕಜೆಗದ್ದೆ**

# ನನ್ನ ಮಾತ್

ನಿಜವಾದ ಕವಿತೆ ನರಮನ್ಸನ ಸಂಕಟ, ಕಂಟಕಗಳ ಗುರ್ತಿಸಿ ಸಮಾದಾನ ಕೊಡಿಕೆ ಪ್ರಯತ್ನ ಮಾಡ್ದೆ; ಸಂತೋಷ, ಉಲ್ಲಾಸಗಳ ಹಂಚಿದೆ. ಕಾಲಗತಿಯ ಬದಲಾವಣೆಗಳ ಕಾಣಿಸಿದೆ. ನಿಜದ ನೆಲೆಯತ್ತ ಕರ್‌ಕೊಂಡ್ ಹೋಕೆ ಕವಿತೆ ಬೇಕು. ಅದ್ ಒಂಟಿತನದ ಸಂಗಾತಿ ಅಂತ ನಂಬಿ ನಾ ಸಾಹಿತ್ಯ ಕ್ಷೇತ್ರಕ್ಕೆ ಬಂದೆ.

ಆಡುಬಾಸೆ ಆಗಿದ್ದ ಅರೆಬಾಸೆಗೆ ಅಕಾಡೆಮಿ ಸಿಕ್ಕಿದ ಮೇಲೆ ಅದ್ ಬರಹದ ಬಾಸೆ ಆಕೆ ಅನುಕೂಲತೆ ಒದಗಿತ್. ಹಿಂಗಾರ ಪತ್ರಿಕೆಯ ಪ್ರಕಟನೆ ಸುರು ಆತ್. ಪತ್ರಿಕೆಗೆ ಬರಹ ಬೇಕು ಅಂತ ಸಂಪಾದಕರ್ ಕಾಗ್ದ ಬರ್‌ದೊ, ಕನ್ನಡಲಿ ಬರ್‌ಕೊಂಡಿದ್ದ ನಾ ಅರೆಬಾಸೆಲಿ ಬರಿಯಕೆ ಪ್ರಯತ್ನ ಮಾಡ್ದೆ. ಹಾಂಗೆ ಬರ್‌ದ ಕವಿತೆಗ ಪುಸ್ತಕ ಆಗಿ ಬಂದುಟು.

'ಯಾಕೀ ಕತೆ ಹೀಂಗಾತ್' ಕವಿತೆ ಹಿಂಗಾರ ಪತ್ರಿಕೆಲಿ ಪ್ರಕಟ ಆದ ಮೇಲೆ ಅದ್ ಮಂಗಳೂರು ವಿಶ್ವವಿದ್ಯಾನಿಲಯ ಪಠ್ಯಪುಸ್ತಕ ಸಮಿತಿಯ ಕಣ್ಣಿಗೆ ಬೀತ್. ಅವರ 'ನುಡಿಯೊರತೆ' ಪಠ್ಯಪುಸ್ತಕಲಿ ಸೇರ್‌ಪಡೆ ಆತ್. ವಿಶ್ವವಿದ್ಯಾನಿಲಯದ ಮೆಟ್ಲ್ ಹತ್ತಿ ತನ್ನ ವಿಳಾಸ, ಚಹರೆ, ಚಿಂತನೆಗಳ ತಿಳ್ಸಿಕೆ ಅರೆಬಾಸೆಗೂ ಒಂದು ವೇದಿಕೆ ಸಿಕ್ಕಿತ್ ಅಂತ ನಾ ತಿಳ್ಕಂಡೆ.

ಈ ಪುಸ್ತಕನ ಕರ್ನಾಟಕ ಅರೆಬಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯವು ಪ್ರಕಟ ಮಾಡ್ಯೊಳೊ. ಅದರ ಅಧ್ಯಕ್ಷರ್, ಸದಸ್ಯರ್ ಹಾಂಗೂ ಅಧಿಕಾರಿ ವರ್ಗಕ್ಕೆ ಕೃತಜ್ಞತೆ ಸಲ್ಲಿಸಿವೆ. ಮುದ್ರಕ ಕಲ್ಲೂರು ನಾಗೇಶರಿಗೆ ವಂದನೆ.

ಸುಳ್ಯ **ಕುತ್ಯಾಳ ನಾಗಪ್ಪ ಗೌಡ (ಕಿರಣ)**
30–7–2021

# ಪುಟನೋಟ

## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅಧ್ಯಕ್ಷರು

**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**

**ಸದಸ್ಯರು**

ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ

ಶ್ರೀಮತಿ ಸ್ಮಿತಾ ಅಮೃತರಾಜ್

ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ

ಶ್ರೀ ಧನಂಜಯ ಅಗೋಳಿಕಜೆ

ಶ್ರೀ ದಂಬೆಕೋಡಿ ಎಸ್. ಆನಂದ

ಡಾ. ಕೂಡಕಂಡಿ ದಯಾನಂದ

ಶ್ರೀ ಕುಸುಮಾಧರ ಎ.ಟಿ.

ಡಾ. ವಿಶ್ವನಾಥ ಬದಿಕಾನ

ಶ್ರೀ ಜಯಪ್ರಕಾಶ್ ಮೋಂಟಡ್ಕ ಬಿಳಿನೆಲೆ

ಶ್ರೀ ಪುರುಷೋತ್ತಮ ಕಿರ್ಲಾಯ

ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು

ಶ್ರೀ ಕಿರಣ್ ಕುಂಬಳಚೇರಿ

ಶ್ರೀ ಭರತೇಶ ಅಲಸಂಡೆಮಜಲು

ರಿಜಿಸ್ಟ್ರಾರ್

**ಶ್ರೀ ಚಿನ್ನಸ್ವಾಮಿ**

# ಯಾಕೀ ಕತೆ ಹೀಂಗಾತ್?

ಬೂಮಿಯ ಮಗಳ ಕಾಡ್‌ಲಿ ನೋಡಿ
ಕುಂಡಚ್ಚಂಗೆ ತಲೆಬಿಸಿಯಾಗಿ
ಅತ್ತಾ ಇತ್ತ ಮೇಲೆ ಕೆಳಗೆ
ಸುತ್ತಾ ಮುತ್ತ ಓಡಾಡ್ತಿತ್ತ್;
ಮರ್ತ್ ಮರ್ತ್ ಕೇಳ್ವಾಂಗಿತ್ತ್ :
ಯಾಕೀ ಕತೆ ಹೀಂಗಾತ್?

ಸೇತುವೆ ಕಟ್ಟಕೆ ಹೊಯಿಗೆಯ ಹೊತ್ತೊಳೆ,
ನಗ್‌ತಿತ್ತಂದ್ ಕಡಲ ತೆರೆ;
ರಾಮದೇವರೇ ಹೊಗಳಿದೊ ಮತ್ತೆ
ಬೆನ್ನ್‌ಲಿ ಬರ್ದೊ ಮೂರು ಗೆರೆ.
ಅಂತದ್ ಹೋಗಿ ಈ ಗತಿ ಬಾತ್;
ಯಾಕೀ ಕತೆ ಹೀಂಗಾತ್?

ರಾಮಸ್ವಾಮಿಗ ಹೂಗಳ ನೋಡಿ
ನಿಂತಲ್ಲೇ ನಿಂತಿರ್ತಿದ್ದೊ;
ಸೀತೆಯ ದನಿಯೋ ಕೋಗಿಲೆ ದನಿಯೋ
ತಿಳಿಯದೆ ಒಸಿ ನಗ್ತಿದ್ದೊ;
ಅಂತದ್ ಹೋಗಿ ಈ ಗತಿ ಬಾತ್;
ಯಾಕೀ ಕತೆ ಹೀಂಗಾತ್?

ಸಣ್ಣಂವ ದೊಡ್ಡಂವ ಅಂಗದ ಜಾಂಬವ
ಕಾಡಿಗೆ ಕಾಡೇ ಸೈಸಿಕರಾಗಿ
ಪುಡಿಪುಡಿ ಮಾಡ್ದೊ ಲಂಕೆಗೆ ಹೋಗಿ;
ಕದ್ದಂವ ಕಳ್ಳ ಸತ್ತೇ ಹೋತ್;
ರಾವಣ ಸತ್ತರು ಕತೆ ಹೀಂಗಾತ್!

ಪರೀಕ್ಷೆಗೊಡ್ಡಿದ ಕೆಂಡದ ರಾಸಿಯ
ಉರಿಯೋ ನಾಲಿಗೆ ಹೂವಾಗಿತ್ತ್;
ಸೀತೆಯ ಪಾದಕೆ ತಂಪಾಗಿತ್ತ್;
ಹುಟ್ಟಿದ ಸಂಸಯ ಸುಟ್ಟೇ ಹೋತ್;
ಆದರು ಯಾಕೀ ಕತೆ ಹೀಂಗಾತ್?

ಎಲ್ಲೋ ಯಾರೋ ಏನೋ ಹೇಳಿರೆ
ಸೀತೆಗೆ ಈ ಗತಿ ಯಾಕೆ?
ಮಾಡದ ತಪ್ಪಿಗೆ ಕಾಡಿನ ವಾಸ;
ನುಂಗುವ ಕತ್ತಲೆ; ಚಂದ್ರನ ದೀಪ!
ಕರುಣೆಗು ಬರನೆ ಅಯ್ಯೋ ಪಾಪ
ಅರಮನೆ ಬುಟ್ಟ್ ಕಾಡಿಗೆ ಬಾತ್;
ನಂಬುದೆ ಕಷ್ಟ, ಯಾಕ್ಹೀಂಗಾತ್!

# ನಂಟ್ರ್

ಎಲೆಯ ತಲೆಯ ಮೇಲೆ ನೋಡಿ
ನೆಲದ ನಗೆಯ ಹೂವುಲಿ!
ಮುಗಿಯದಷ್ಟ್ ಬಗೆಯ ಬಣ್ಣ
ಯಾರ್ ಇಸಿದೊ ಮಣ್ಣ್‌ಲಿ!

ನೆಲದ ಮೇಲೆ ಮರದ ನೆರಳ್,
ಮರದ ಬೇರ್ ಮಣ್ಣ್‌ಲಿ;
ಕೊಂಬೆ ಕೈಲಿ ಬೆಳ್ದ ಕಾಯಿ,
ನೆಲದ ಪ್ರೀತಿ ಹಣ್ಣ್‌ಲಿ.

ಹಣ್ಣ್ ಹಿಡ್ದ ಬೆರಳ ಮೇಲೆ
ಹಕ್ಕಿ – ರಾಯಭಾರಿಗ;
ಹಾರಿ ಹೋಗಿ ಬೀಜ ಬಿತ್ತಿ
ಬಾವ ಸಂಸಾರಿಗ!

ಬಗ್ಗಿದೊಂದು ಗೆಲ್ಲ್ ಹೇಳ್ದೆ :
ಒಬ್ಬಂಗೊಬ್ಬ ನಂಟರ್;
ಬೆಂಕಿ ನೀರ್ ಗಾಳಿ ಬೂಮಿ
ಬಾನ್ ಸೂರ್ಯ ಚಂದ್ರರ್;
ಮರದ ಬೇರ್ ಎಲೆಯ ಹಸಿರ್
ಹಣ್ಣ್ ಹಕ್ಕಿ ನಂಟರ್!

# ಸುಗ್ಗಿ

"ಕಾಗೆಯ ಮನೆಲಿ ಮಕ್ಕಳ ಬುಟ್ಟು
ಎಲ್ಲಿಗೆ ಹೊರ್‌ಟಾ ಕೋಗಿಲಕ್ಕಾ?"

"ಮಾವಿನ ಮರಗಳ ಚಪ್ಪರದಡಿಲಿ
ಸುಗ್ಗಿಯ ಹಬ್ಬ ಸುರುವಾತ್.
ನನ್ನದೆ ಹಾಡ್ ಸುರುನ ದಿನ
ಕಾಜಾಣಯ್ಯನ ಪಿಟೀಲು ಉಟ್ಟು;
ಮರಕೊಡಪಣ್ಣನ ತಬ್ಲೆಯ ಪೆಟ್ಟು;
ಕುಣಿಯೋಕುಟ್ಟು ನವಿಲಿನ ಜುಟ್ಟು;
ಗಿಡಮರ ಬಳ್ಳಿ ತೋರಣ ಕಟ್ಟಿ
ಕರಿತಾ ಉಟ್ಟು ಕಾಗದ ಕೊಟ್ಟು;
ನೀನೂ ಬಾಯಾ ಗುಬ್ಬಕ್ಕಾ"

"ಮನೆ ಯಜಮಾನ ಮನೆಯೊಳಗಿಲ್ಲೆ;
ಸಣ್ಣವು ಮಕ್ಕ; ಹೊರ್ಟರೆ ಮರ್ಟವೆ;
ಕಳ್ಳರ ಕಾಟ ವಿಪರೀತ;
ನಮ್ಮನೆಗಂತೂ ಬಾಗಿಲೆ ಇಲ್ಲೆ;
ಸದ್ಯಕೆ ಬೇಡ ಸಂಗೀತ!"

# ಸಂತೆಲಿ ಒಬ್ಬ ಇಂತವ ಇತ್ತ್

ಸಂತೆಲಿ ಒಬ್ಬ ಇಂತವ ಇತ್ತ್.
ಒಂದು ಹೆಜ್ಜೆ ಮುಂದೆ ಹಾಕಿ,
ಎರಡ್ ಹೆಜ್ಜೆ ಹಿಂದೆ ಹೋಗಿ,
ಮುಂದೆ ನೋಡಿ ನಡೀತಿತ್ತ್.

ಮೂರಕ್ಕೆ ಮೂರು ಕೂಡ್ಸಿ,
ಮೂರರ ಕಳ್ದ್ ನೋಡಿ,
ಮೂರರಿಂದ ಗುಣ್ಸಿ ಅದ್ಕೆ
ಮೂರರಿಂದ ಭಾಗಿಸ್ತಿತ್ತ್!

ಲೆಕ್ಕ ಹೇಳಿ, ಲೆಕ್ಕ ಮಾಡಿ,
ಅವನ ಜಾಣ್ಮೆಗವನೆ ಮೆಚ್ಚಿ,
ಎಡಕೆ ಹೋಗಿ, ಬಲಕೆ ತಿರಿಗಿ,
ಮುಂದೆ ನೋಡಿ, ಹಿಂದೆ ನಡ್ದ್,
ಅವಂಗೆ ಅವ್ನೆ ಹೇಳ್‌ತಿತ್ತ್;
ಮೂರೆಂದರೆ ಬರಿ ಮೂರಲ್ಲಣ್ಣ;
ಅದಿಯೆ ಜನನ, ಜೀವನ, ಮರಣ!

# ಪುಣ್ಯಕೋಟಿಯ ಕರ್ ಬಚಾವಾತ್

ಕರ್ ಮೇಯ್ತಿತ್ತ್;
ನರಿ ನೋಡ್ತಿತ್ತ್,
ತೋಳಕೆ ಹಸಿವಾಗಿತ್ತ್.
ಕಣ್ಣಿಲಿ ದೀಪ
ಹುಲಿ ಉರಿಸಿತ್ತ್;
ಬೆಟ್ಟದ ಮೇಲೆ ಕಾದಿತ್ತ್

ಕಂಡತ್ ನಾಯಿ;
ಬೊಗಳುತ ಬಾತ್;
ಕೋವಿ ಸಮೇತ
ರೈತನೂ ಬಾತ್;
ಬಾಳ್ಕತ್ತಿನು ಕೈಲಿತ್ತ್.

ಕೋವಿ, ಕತ್ತಿಯ
ರೈತನ ನೋಡಿ
ನರಿ ಮಡ್ಚಿತ್ ಬಾಲ;
ಹೋತೆತ್ತಲೊ ತೋಳ;
ಕಣ್ಣಿನ ದೀಪ
ಆರ್‌ಸಿ ಮತ್ತೆ
ಹುಲಿ ಹಾಕಿತ್ ತಾಳ,
ಹಳೆ ಹಾಡಿನ ನೆಂಪಾತ್
ಪುಣ್ಯಕೋಟಿಯ
ಕರ್ ಬಚಾವಾತ್.

# ಬದ್ಕೋವಂಗೆ ಬೆಳಕ್

ಬದ್ಕೋವಂಗೆ ಬೆಳಕ್ ಬಾದು ಎಲ್ಲಿಂದ?
ಆಕಾಶದ ಸೂರ್ಯ ಸೂಸಿದೆ ಬೆಳಕ್.
ಆ ಬೆಳಕಿಲಿ ನರಮನ್ಸ ನಡ್ಡದೆ,
ಕೆಲ್ಸ ಮಾಡ್ದೆ, ಭೂಮಿಲಿ ಬಾಳ್ವೆ ನಡ್ಸಿದೆ.

ಆಕಾಶದ ಸೂರ್ಯ ನಿದ್ದೆ ಮಾಡಿರೆ?

ಚಂದ್ರ ಎದ್ದ್ ಬಂದದೆ; ಬೆಳಕ್ ಕೊಟ್ಟದೆ;
ಆ ಬೆಳಕಿಲಿ ನರಮನ್ಸ ಹೋದ್ದೆ, ಬಂದದೆ
ತಂಪು ಅನುಭವಿಸಿ ಬಾಳ್ವೆ ನಡ್ಸಿದೆ.

ಚಂದ್ರನೂ ರಜೆ ಮಾಡಿರೆ?

ಬೆಂಕಿಯ ಒಳಗುಟ್ಟು ಬೆಳಕ್;
ದೀಪ ಉರ್ಸಿ ನರಮನ್ಸ ಊಟ ಮಾಡ್ದೆ;
ಅತ್ತಿತ್ತ ಹೋಗಿ, ಬಂದ್, ಬಾಳ್ವೆ ನಡ್ಸಿದೆ.

ಬೆಂಕಿ ಆರಿ ಹೋದರೆ?

ಶಬ್ದ ಕೊಟ್ಟದೆ ನರಮನ್ಸಂಗೆ ಬೆಳಕ್.
ಶಬ್ದ ಕೇಳಿ ನೋಡ್ದೆ, ಆಡ್ದೆ, ಸಂಚಾರ ಮಾಡ್ದೆ
ಶಬ್ದದ ಬೆಳಕಿಲಿ ಬಾಳ್ವೆ ನಡ್ಸಿದೆ.

ಶಬ್ದ ಕೂಡ ನಿಶ್ಶಬ್ದವಾದರೆ?

ಸೂರ್ಯ ಮುಳುಗಿ, ಚಂದ್ರ ಮುಳುಗಿ
ಬೆಂಕಿ ಆರಿ, ಶಬ್ದ ನಿಶ್ಶಬ್ದವಾದರೆ
ನರಮನ್ಸನ ಎದೆಲಿ ಜ್ಞಾನದ ಬೆಳಕ್ ಇದ್ದದೆ
ಆ ಬೆಳಕಿಲಿ ನಡ್ದ್ ಬಾಳ್ವೆ ನಡ್ಸಿದೆ.

**(ಪ್ರಶ್ನೆ ಕೇಳ್ದಂವ ಜನಕರಾಜ; ಉತ್ತರ ಕೊಟ್ಟಂವ ಯಾಜ್ಞವಲ್ಕ್ಯ. ಬೃಹದಾರಣ್ಯಕೋಪನಿಷತ್ತು.)**

# ಹಕ್ಕಿ ಹೂವಿನ ಸ್ನೇಹ

ಈ ಬಳ್ಳಿ ಮೇಲೆ ಆ ಹೂವು ಅರಳಿ
ಉಯ್ಯಾಲೆ ಆಡ್‌ತಿತ್ತ್;
ಆ ಹೂವ ನೋಡಿ ಈ ಹಕ್ಕಿ ಹಾರಿ
ಸಿಹಿರಸನ ಹುಡುಕುತಿತ್ತ್.

ಕೆಂಪು ಎಸಳಿನ ಮೇಲೆ ಹೊಳಪು ಬಣ್ಣದ ಹಕ್ಕಿ
ಸಿಹಿಪಾಕ ಹೀರ್‌ತಿತ್ತ್;
ಒಂದೀಸ್ ಹೊತ್ತು ಸಾಕಾಗ್‌ತಿತ್ತ್;
ಪುರ್ರಂತ ಹಾರ್‌ತಿತ್ತ್.

ಹಿಂತಿರಿಗಿ ಮತ್ತೆ ಹಕ್ಕಲೆನೆ ಕುದ್ದ್
ಚಕ್ಕಂದ ಆಡ್‌ತಿತ್ತ್;
ಅದ್ ಹಾಡ್‌ತಿತ್ತ್; ಹೂ ನೋಡ್‌ತಿತ್ತ್;
ಗೀತಕ್ಕೆ ಬಣ್ಣ ಇತ್ತ್ !

ಹೂವು ಹಕ್ಕಿಯ ಒಳಗೆ
ಏನ್ ನಡ್‌ದದ್ ಮಾತ್?
ಯಾರಿಗೇನ್ ಗೊತ್ತು!
ಹೂವು ಮಣ್ಣಿಗೆ ಸೇರ್‌ತ್;
ಹಕ್ಕಿ ಬಾನಿಗೆ ಹಾರ್‌ತ್,
ಸುಳಿಗಾಳಿ ಬೀಸ್‌ತಿತ್ತ್!

# ಕುಂಞಣ್ಣನ ಮಂಜ

ಅಡಿಕೆ ಕೊಯ್ಯೊ ಕುಂಞಣ್ಣಂಗೆ ಇಡೀ ವೊರ್ಸ ಕೆಲ್ಸ;
ಅಡಿಕೆ ಕೊಯ್ಲು ಮುಗ್ದ ಮ್ಯಾಲೆ ಕಾಯಿ ತೆಗೆವ ಕೆಲ್ಸ;
ಕಾಯಿ ಕೊಯ್ಲು ಮುಗ್ದ ಮೇಲೆ ಮದ್ದು ಬುಡುವ ಕೆಲ್ಸ.
ಅಡಿಕೆ ಚಾಳೆ ತೋಟದವ್ಕೆ ಕುಂಞಣ್ಣನೇ ಬೇಕು.
ಕುಂಞಣ್ಣೊಪ್ಪಿಕೊಂಡ್ರೆ ಸಾಕ್ ಕರಾರ್ ಬರ್ಕೊಟ್ಟಂಗೆ;
ಹೇಳ್ದ ದಿನ ಹೇಳ್ದ ಹೊತ್ತು ಕೊಕ್ಕೆ ಮಣೆ ರೆಡಿ.
ತೊಂದ್ರೆ ಬಂದ್ರೆ ಕೂಡ್ಲೆ ಕೂಡ್ಲೆ ವರ್ತಮಾನ ಕೊಡ್ದು.
ಮನೆಗ್ಬಂದ್ ವಿಷ್ಯ ತಿಳ್ಸಿ ಸಮ್ಧಾನ ಮಾಡಿ ಹೋದು.
ಊರವು ಹೇಳ್ವೆ ಕುಂಞಣ್ಣಂದ್ರೆ ಸಿಸ್ತಿನ್ ಸಿಪಾಯಿ.
ಸಂಬ್ಳದಲ್ಲೂ ತಕ್ರಾರಿಲ್ಲೆ; ದಿನಕ್ಸಾವಿರುಪಾಯಿ!

ಮನೆಯ ಚಿಂತೆ ಅವಂಗಿಲ್ಲೆ; ಅದ್ಕೆ ಹೆಣ್ಣ್ ಹೊನ್ನಮ್ಮ.
ಕುಂಞಣ್ಣಂಗೆ ಮಕ್ಕ ಮೂರು; ಒಂದು ಗೂಡೆ,
ಎರಡ್ ಗಂಡ್.
ಗೂಡೆ ಮಾಡ್ದೆ ಅಡಿಗೆ ಕೆಲ್ಸ ಊರ ಸಾಲೇಲಿ.
ದೊಡ್ಡ ಹೈದ ಮನೇಲಿಲ್ಲೆ, ಸೇವೆಗಂವ ಮುಂದೆ;
ಸ್ಟ್ರೈಕು ಜಾಥ ಒತ್ತೆಕೋಲ ಜಾತ್ರೆ ಮದುವೆ ಬೊಜ್ಜ
ಎಲ್ಲೆ ಆದ್ರು ಹಗಲು ರಾತ್ರಿ ಕರ್ದ ಕೂಡ್ಲೆ ತಯಾರು
ಸಣ್ಣಮಂಜ ರಾಮಚಂದ್ರ, ಕಲಿಯೋದ್ರಲ್ಲಿ ಹುಷಾರು;
ಚುರುಕುಮಂಡೆ, ತಪ್ಪಿಕಿಲ್ಲೆ ಗಣಿತದಲ್ಲಿ ನೂರು;
ಕ್ಲಾಸಿಗವ್ನೆ ಪಸ್ಟು, ತಪ್ಪಿಹೋದ್ರೆ ಸೆಕೆಂಡು;
ಬರಹ ಕೂಡ ಅವನ ಹಂಗೆ ಚಂದ ಗುಂಡು ಗುಂಡು,

ರಾಮಚಂದ್ರ ಇಂಜಿನಿಯರಾಗಿ ವೊರ್ಸ್ ಎರಡ್ ಕಳ್ತ್.
ಕೆಲ್ಸದ್ಮೇಲೆ ಅಮೆರಿಕ ಸೇರಿ ತಿಂಗಳಾರ್ ನೆನ್ನೆಗೆ.
ಅಪ್ಪನ ಕೈಲಿ ಮಂಜನ ಫೋನು, ವಾರ ವಾರ ಮಾತಾಡ್ದೆ
ಒತ್ತಿ ಒತ್ತಿ ಗುಂಡಿ ಒತ್ತಿ ಅಪ್ಪ ಕೂಡ ಕಲ್ತುಟು.
ಫೋನಿಗೆಂತ ಬೇರೆ ಜೇಬು ಚಡ್ಡಿ ಕಿಸೇಲಿ;
ಮಂಜನ ಫೋನಿಗೆ ರಿಂಗ್ಟೋನು ಬೇರೆ;
ವಾರ ಬಂತಮ್ಮ ಗುರುವಾರ ಬಂತಮ್ಮಾ..

ಕಳ್ದ ವಾರ ಫೋನು ಮಾಡಿ ಮಂಜ ಮಾತಾಡಿತ್ತ್,
ಜಾತಿ ಭೂತ ಪೀಡೆಪ್ರೇತ ನಾವ್ಗೆ ಯಾಕೆ ಬೇಕು?
ಅಮೆರಿಕದವ್ರ ನೋಡಿ ನಾವು ಬದುಕೋ ರೀತಿ ಕಲಿಯೋಕು;
ಸತ್ಯ ಹೇಳಿ ಬುದ್ಧಿ ಬಳಸಿ ನಾವು ಕೆಲ್ಸ ಮಾಡೋಕು.
ಮಂಜನ ಮಾತ್ ಕೇಳ್ತಾ ಕೇಳ್ತ ಕುಂಞಣ್ಣಂಗೆ ಅನುಮಾನ;
ಇವ್ನ ಮನ್ಸ್ ಹೀಂಗಾದ್ಮೇಲೆ ಮುಂದಿನ್ದಿವ್ಸ ಹೇಂಗೊ!
ಎಂದಿನಂತೆ ಇಂದ್ ಕೂಡಾ ಮರದ ಮೇಲೆ ಕುಂಞಣ್ಣ:
ಮಣೆಯೇ ಪೀಠ, ಕೈಲಿ ಕೊಕ್ಕೆ, ಅಡಿಕೆ ಕೊಯ್ಯೋ ಹೊತ್ತು
ಕಿಸೆಯ ಫೋನು ಹಾಡ್ ಹೇಳ್ತ್; ವಾರ ಬಂತಮ್ಮಾ
ರಿಂಗೇ ಹೇಳ್ದೆ ಮಂಜನ ಫೋನು, ಕಿವಿಗೆ ಹಿಡ್ತ್ ಕುಂಞಣ್ಣ :
"ಅಪ್ಪಾ ನಂಗೆ ಪ್ರಮೋಶನಾತ್, ದೊಡ್ಡ ಹುದ್ದೆ ಮುಂದೆ;
ದೊಡ್ಡ ಸಂಬ್ಳ, ದೊಡ್ಡ ಬಂಗ್ಲೆ, ದೊಡ್ಡ ಕಾರು ನಂಗೆ"
ಕುಂಞಣ್ಣನ ಮನ್ಸಿನೊಳ್ಗೆ ಅರಳ್ತಿತ್ತ್ ಹಿಂಗಾರ;
ಮೋರೆ ಮೇಲೆ ಮೂಡಿಬಾತ್ ಹೆಮ್ಮೆ – ತುಂಡು ಬಂಗಾರ.
"ಅಮೆರಿಕದಲ್ಲಿ ಕಲ್ತದಂದ್ರೆ ಸತ್ಯದ್ಮಾತ್, ನೇರ ನಡ್ತೆ
ನಮ್ಮ ಬಾಸ್ ಸತ್ಯವಂತ ಅವ್ರ ಹೆಣ್ಣ್ ಸತ್ಯವಂತೆ;
ಒಂದೇ ಮಗ, ತುಂಬಾ ಚಂದ, ವಿದ್ಯಾವಂತೆ
ನನ್ನ ಕಂಡ್ರೆ ತುಂಬಾ ಪ್ರೀತಿ, ನಂಗೂ ತುಂಬಾ ಇಷ್ಟ
ಒಂದು ವಾರ ರಜೆ ಮಾಡಿ ಬಾಕನ ಕರ್ಕೊಡ್ಬನ್ನೆ."

ಮಂಜನ ಮಾತ್ ಕೇಳ್ತಿದ್ದಂಗೆ ಫೋನು ಕೆಳಗೆ ಬೀತ್;
ಮರದ ಮೇಲೆ ಕುಂಞಣ್ಣ ಗಟ್ಟಿ ತಬ್ಕೊಂಡಿತ್ತ್;
ಕಾದ್ಕೊಂಡಿದ್ದ ಮರಕೊಡ್ಪ ನೋಡಿ ಹಾರಿ ಹೋತ್!

# ಶಕುನದವನ ಪಟ್ಟಿ

ಒಬ್ಬಂಗೊಬ್ಬ ಬೇಕೇ ಬೇಕು;
ತಬ್ಬಿಕೊಂಬಕೂ ಇಬ್ಬರ್ ಬೇಕು;
ಒಬ್ಬನೆ ಇದ್ದರೆ ದಿಬ್ಬಣ ಆಗದ್,
ಸುಬ್ಬನ ವಾಲಗ ಬೇಕು!

ಕಬಡ್ಡಿಯಾಡಿಕೆ ರೈಡರ್ ಬೇಕು;
ದಾಂಡಿಗನೆದುರಿಗೆ ಬೌಲರ್ ಬೇಕು;
ಗುದ್ದಾಟಕ್ಕೂ ಇಬ್ಬರ್ ಬೇಕು,
ಗೆಲ್ಲೋಕಾದ್ರೆ ಸೋಲೋಂವ ಬೇಕು!

ಸುಳ್ಳನ ಗೆಲಿಸಿಕೆ ನಂಬೊಂವ ಬೇಕು;
ನಟನೆಯ ಖ್ಯಾತಿಗೆ ಭಕ್ತರ್ ಬೇಕು;
ಕಷ್ಟ ಬಂದರೆ ಕಣ್ಣೀರೊರಸಿಕೆ,
ಭ್ರಷ್ಟಚಾರಿಗೆ ನಿಷ್ಠುರ್ ಬೇಕು!

ತಯಾರಿಸೊವ್ಕೆ ಮಾರೊಂವ ಬೇಕು;
ಮಾರಾಟಕ್ಕೆ ತಕೊಂಬಂವ ಬೇಕು;
ಅಡಿಗೆಯ ಮಾಡಿಕೆ ಪಂಡಿತ ಬೇಕು,
ಮಾಡಿರೆ ಸಾಲದ್, ಉಂಬೊಂವ ಬೇಕು
ಒಬ್ಬಂಗೊಬ್ಬ ಬೇಕೇ ಬೇಕು.

ಕಾಡಿಗೆ ಕಳ್ಸಿಕೆ ಕೈಕೆಯಿ ಬೇಕು;
ಅಣ್ಣನ ಹಿಂದೆ ತಮ್ಮನು ಬೇಕು;
ಸೇತುವೆ ಕಟ್ಟಿಕೆ ಸಣ್ಣವು ಬೇಕು;
ಸ್ನೇಹಿತ ಬೇಕು; ವೈರಿಯು ಇದ್ದದೆ
ರಾಮಾಯಣಕೆ ರಾವಣ ಬೇಕು!

# ಸಂಬಳದವರ ಹಾಡ್

ತಿಂಗಳ್ ಹೋಗಿ ಸಂಬಳ ಬಾತ್
ಹರ್ಷದ ಜತೆಗೂಡಿ
ಕಾದ್ ನಿತ್ತುಟು ಬಿಲ್ಲಿನ ಸಾಲ್
ಜೇಬಿಗೆ ಮುಖಮಾಡಿ!

ನೀರ್‌ನ ಬಿಲ್ಲ್, ಹಾಲ್‌ನ ಬಿಲ್ಲ್,
ಮದ್ದಿನ ಬಿಲ್ಲ್, ಫೋನ್‌ನ ಬಿಲ್ಲ್
ಸಾಲೆಯ ಫೀಸ್, ಗ್ಯಾಸಿನ ಬಿಲ್ಲ್
ಸಾಲದ ಕಂತ್, ಅಸಲಿನ ಬಡ್ಡಿ
ಪೇಪರ್ ಬಿಲ್ಲ್, ಕೇಬ್ಲ್ ಬಿಲ್ಲ್
ತಿಂಗಳ ರೆಂಟ್, ಕರೆಂಟ್ ಬಿಲ್ಲ್,
ನೋಡಿ ನೋಡಿ ಪಾವತಿ ಮಾಡಿ;
ದಿನಸಿ ಅಂಗ್ಡಿ ಲೆಕ್ಕ ಹಾಕಿ;
ತಿಂಗ್ಳಿಗೊಮ್ಮೆ ಗುಂಡಿನ ಶೋಕಿ
ಹಿಂದಿನ ಸಾಲ ಅಲ್ಲೇ ಬಾಕಿ!

ಸಾರಿಗೆ, ಮೆಣ್ಸ್, ಜೀರಿಗೆ, ಬೆಲ್ಲ
ಪೆಟ್ರೋಲ್, ಗ್ಯಾಸ್, ದುಬಾರಿ
ಸೊಪ್ಪು, ಗೆಡ್ಡೆ, ಕಾಯಿ ಪಲ್ಲೆ –
ಚಿನ್ನಕೆ ಸಮಸಮ ತರ್ಕಾರಿ!

ಹಬ್ಬ ಬಾತ್ ಬಟ್ಟೆ ಬೇಕು
ಅಕ್ಕಿ ಹಣ್ಣ್ ಹೂವು,
ಎಣ್ಣೆ, ಬೆಣ್ಣೆ. ಬೇಳೆ, ಸಕ್ರೆ –
ಅಯ್ಯೊ ಕಹಿಬೇವು!

ಮಾಲ್ ಮಳಿಗೆಲಿ ಸಂತೆದಾರಿಲಿ
ಬೆಲೆಹೋರಿಯ ಗುಟುರು!
ದಾಳಿಗೆ ಹೆದ್ರ್‌ದ ಜನಗಳ ಮೋರೆಲಿ
ಹರ್ದದೆ ಹನಿಹನಿ ಬೆವರು!

ಡಾಲರ್ – ಆನೆ ನಡ್ದದೆ ಹಾದಿ
ಹೆಂಗೇ ಇರಲಿ ಕಾಡ್;
ಹೆದ್ರಿ ನಡ್ಡದೆ ಕಾಡಿನ ನಡುಲಿ
ಊರಿನ ರೂಪಾಯಿ, ಆಡ್!

# ಉದ್ಧಾರ

ದೊಡ್ಡವರ ಒಕ್ಕಲಾಗಿ ತುಂಬಾ ಕಾಲ ಬೇಸಾಯ ಮಾಡ್ದೆ;
ಬೆಟ್ಟುಗದ್ದೆ, ಬೆಳೆಕಮ್ಮಿ, ಗೇಣಿ ಜಾಸ್ತಿ, ದುಡ್ಡ್ ಸೋತುಹೋದೆ.
ವೊರ್ಸ ವೊರ್ಸ ಸಾಲ ಸೋಲ ನಷ್ಟ ಕಷ್ಟ – ಕಂಗಾಲಾದೆ.

ಗೇಣಿ ಕಮ್ಮಿ ಮಾಡೋಕು, ಕೊಳಕೆಗದ್ದೆ ಕೊಡ್ಸಿ ಉದ್ಧಾರ ಮಾಡೋಕು
ಹೀಂಗಂತ ಅರ್ಜಿ ಬರ್ಸಿ ಕೈಲಿ ಹಿಡ್ಕಂಡೇ ದೊಡ್ಡವಿದ್ದಲ್ಲಿಗೆ ನಡ್ದೆ.
ನಾ ಹೋಕಾಕನ ದೊಡ್ಡೊವು ಅಲ್ಲಿ ಇರ್ತ್ಲ್ಲೆ.
ಹಳೆ ವ್ಯಾಜ್ಯಗಳ ವ್ಯವಹರಿಸಿಕೆ ಇತ್ತ ಬಂದೊಳಾಂತ ಸುದ್ದಿ ಸಿಕ್ಕಿತ್.
ದೊಡ್ಡ ಸುದ್ದಿನ ತಿಳ್ಕಂಡ್ ಹೋದ ದಾರಿಲೇ ವಾಪಾಸ್ ಬಂದೆ.

ಊರು ಕೇರಿ ಪೇಟೆ ತೋಟ ಆಟ ಕೂಟ ಅಂಕ ಆಯನ ಹುಡ್ಕಾಡ್ದೆ
ಒಂದು ಕಡೆ ಕಳ್ಳರ, ಕೊಲೆಗಾರರ ದರ್ಪದಹಂಕಾರದ ಮಾತ್ ಕೇಳಿಬಾತ್
ನಾ ಹುಡ್ಕ್ತಿದ್ದ ದೊಡ್ಡೊವು ಅಲ್ಲಿದ್ದೊ. ಅವ್ಕೆ ನನ್ನ ಗುರ್ತ ಸಿಕ್ಕಿತ್.

'ನಿನ್ನ ಕೆಲ್ಸ ಆದ್ಹಾಂಗೆ' ಅಂತ ಕರ್ದ್ ಹೇಳ್ತಿದ್ಹಂಗೆ ಅವು ತೀರ್ಕೊಂಡೊ!
ಉದ್ಧಾರ ಮಾಡಿಕೇಂತ ಹುಟ್ಟಿದಂವ ಒಬ್ಬ ತೀರಿಹೋತ್;
ಇನ್ನೊಬ್ಬ ಹುಟ್ಟಿ ಬರೋಕಷ್ಟೆ ಹೀಂಗಂತ ಯಾರೋ ಹೇಳ್ದಾಂಗಾತ್.

**(ಆಧಾರ: 17ನೆಯ ಶತಮಾನದ ಆಂಗ್ಲ ಕವಿ ಜಾರ್ಜ್ ಹರ್ಬರ್ಟನ ರಿಡೆಂಪ್ಶನ್ ಕವಿತೆ)**

# ಇಕ್ಕಟ್ಟ್

ಸರಿಗೆ ಮೇಲೆ ನಡಿಗೆ;
ತಲೆಯ ಮೇಲೆ ಗಡಿಗೆ;
ಇವರ ದಾಟಿ ಹೋದು ಹೇಂಗೆ?
ಬೀಸ್ತ ಒಳೊ ಬಡಿಗೆ!

ಬಡಿಗೆ ಪೆಟ್ಟ್ ತಾಂಗಿಬುಟ್ರೆ
ಗಡಿಗೆ ಚೂರು ಚೂರು;
ಸರಿಗೆ ಒಸೀ ಜಾರಿ ಬುಟ್ರೆ
ಸೊಂಟ ತುಂಡು ಮೂರು!

'ಬಡಿಗೆ ಹಿಡ್ದ ಜನ್ರ ಕರ್ದ್
ರಾಜಿ ಆದ್ರೆ ಹೇಂಗೆ?'
'ನಗ ನಾಣ್ಯ ಕೇಳ್ವೊ,
ದನ ಧಾನ್ಯ ಕೇಳ್ವೊ,
ಮನೆ ತೋಟ ಕೇಳ್ವೊ,
ಬಾಳೆಗೊನೆ ಕೇಳ್ವೊ,'
'ಅದಕ್ಕೇನ್, ಕೊಟ್ಟರಾತ್'
ಕೇಳ್ದರೆಲ್ಲ ಕೊಡಿಕೆ ಹೋದ್ರೆ
ಒಳ್ಯೋದೆಂತದ್ ನಂಗೆ?

# ಎಲ್ಲರ ಚಿಂತೆ

1

ನಾವಿದ್ದ ಮನೆಗಿತ್ತ್ ಹುಲ್ಲಿನ ಮಾಡ್, ಮಣ್ಣಿನ ಗೋಡೆ,
ಓಡಾಡ್ತಿದ್ದೊ ನೆಲದ ಮೇಲೆ.
ಓ ಅವರ ಮನೆಗಿತ್ತ್ ಹಂಚಿನ ಮಾಡ್, ಕಲ್ಲಿನ ಗೋಡೆ
ಮಾಳಿಗೆಲಿ ಇರ್ತಿದ್ದೊ ಹೆಚ್ಚಿನ ಸಮಯ.

ನಾವ್ಗೆ ಗಂಟೆ ಹೇಳ್ತಿತ್ತ್ ಸೂರ್ಯನ ಬಿಸಿಲ್,
ಮರಗಳ ನೆರ್ಳ್, ರಸ್ತೆಯ ಬಸ್ಸು, ಕುಪ್ಪುಳು ಹಕ್ಕಿ!
ಅವರ ಗೋಡೆಯ ಮೇಲೆ ಹೊಡೆವ ಗಡಿಯಾರ;
ಗಂಟೆ ನೋಡಿ ಊಟ, ಕಾಫಿ, ಓದು, ನಿದ್ದೆ.

ಅವರ ಮೇಜಿನ ಮೇಲೆ ರೇಡಿಯೊ ತಲೆಮೇಲೆ ಬಟ್ಟೆಯ ಮುಸುಕು
ಪಕ್ಕದಲ್ಲಿತ್ತ್ ಹಾಡುವ ತಟ್ಟೆಯ ಪೆಟ್ಟಿಗೆ
ಆಗಾಗ ಹಾಡ್ದರ್ನೆ ಮತ್ತೆ ಮತ್ತೆ ಹಾಡ್ತಿತ್ತ್!
ರಸ್ತೆಲಿ ಹೋಕನ ಬಾಕನ ನಮ್ಮ ಕಿವಿಗೂ ಬೀಳ್ತಿತ್ತ್.

ಅಲ್ಲಿ ಇಲ್ಲಿ ಸಾಲ ಮಾಡಿ ಹೇಂಗೊ ಹೆಂಗೊ ಗುದ್ದಾಡಿ
ನಾ ಕೂಡ ಹಳೆಮನೆಗೆ ಹಂಚು ಹೊದೆಸಿದೆ.
ಸಿಮೆಂಟು ಕಲ್ಲು ಮರಮಟ್ಟು ಬಳಸಿದೆ
ಗೋಡೆಗೆ ಸುಣ್ಣ ಬಣ್ಣ ಹೊಡ್ಸಿದೆ.

2

ಅವು ಈಗ ಮತ್ತೊಂದು ಬಂಗ್ಲೆ ಕಟ್ಟಿಸಿದೊ.
ನೆಲಕ್ಕೆ ಗ್ರಾನೈಟು, ತೇಗದ ಬಾಗಿಲು, ಕಿಟಕಿ,
ಮಾಳಿಗೆಗೆ ಲಿಫ್ಟು, ಹೊಸಕಾರು ಒಂದಲ್ಲ ಮೂರು!
ಕಾರಿಗೆ ಪ್ರತ್ಯೇಕ ಮನೆ, ಜಾತಿ ನಾಯಿಗೆ ಸುಸಜ್ಜಿತ ರೂಮು!
ಈಗ ದೇಶ ವಿದೇಶಕ್ಕೆ ಹಾರಾಟ ಅಂತರಿಕ್ಷಲಿ!

ನಾವ್ಗೂ ಉಟ್ಟು ಸರ್ಕಾರಿ ಬಸ್ಸು ತಪ್ಪಿರೆ ಓಡಾಟ ಆಟೋರಿಕ್ಷಲಿ
ನಮ್ಮ ಕಿಸೆಗೂ ಬಂದುಟು ಏಟಿಯಂ ಕಾರ್ಡ್, ಮೊಬೈಲ್ ಫೋನು
ಮನೆಯ ಒಳಗೆ ವಾಶಿಂಗ್ ಮೆಶೀನು, ಟೀವಿ, ಫ್ರಿಜ್ಜು, ಫ್ಯಾನು

ಅವು ನ್ಯೂಯಾರ್ಕಿನ ತಜ್ಞರ ಸಭೆಗೆ ಹಾರೋಕಿತ್ತ್ ನೆನ್ನೆ
ವಿಮಾನದೊಳಗೆ ಟೈಂಬಾಂಬು ಪತ್ತೆ! ಹಾರಾಟ ರದ್ದಾತ್.
ಸೈರನ್ ಸದ್ದಾತ್, ಮುಚ್ಚಿದೊ ಅಂಗಡಿ ಬಾಗಿಲ್, ರದ್ದು ವಾರದ ಸಂತೆ
ನಂಗೆ ಬೇಕಿತ್ತ್. ಬಸಳೆ, ಬದನೆ, ಹರಿವೆ ಸೊಪ್ಪು.
ಅಲ್ಲೊಂದು ಇಲ್ಲೊಂದು ನಾಯಿ, ಕಾಗೆ, ಕತ್ತೆ
ಅದೇ ಸುದ್ದಿ ರೇಡಿಯೊ ಟೀವಿಲಿ ಮತ್ತೆ ಮತ್ತೆ
ಯಾರಿಗೆ ಯಾಗ ಎಲ್ಲಿ ಏನಾದೆನೋ, ಅವ್ಕೂ ನಮ್ಮಂತೆ
ಸಂಸಯ, ಭಯ ನಾಳೆಯ ಚಿಂತೆ!

# ಬಸವಣ್ಣ ಹೇಳ್ದ್

ನಂಗೆ ದೊಡ್ಡೊವು ಬಯ್ದರೆ ನನ್ನ ಸಾಂಕಿದವ್ರೊಂತ ತಿಳ್ದನೆ
ನನ್ನ ನಿಂದಿಸಿದವು ನನ್ನ ಬಂದುಗ ಅಂತ ತಿಳ್ದನೆ
ನಂಗೆ ಜೋರು ಮಾಡ್ದವು ನನ್ನ ಅಯ್ಯೆ ಅಪ್ಪ ಅಂತ ತಿಳ್ದನೆ
ಜೀತಕ್ಕೆ ಇಸಿಕೊಂಡವನ ಯಜಮಾನ ಅಂತ ತಿಳ್ದನೆ
ನನ್ನ ಹೊಗಳೊವು ನನ್ನ ಎದೆಗೆ ಚಿನ್ನದ ಬಾಣ ಬುಟ್ರೋಂತ ತಿಳ್ದನೆ
ಕೂಡಲ ಸಂಗಮ ದೇವ್ರೆ ನೀವ್ಗೆ ಅಡ್ಡ ಬಿದ್ದನೆ.

2
ಮರ ದೇವ್ರು ಮೊರ ದೇವ್ರು ಕಲ್ಲು ದೇವ್ರು ಬಿಲ್ಲು ದೇವ್ರು
ಮಡಕೆ ದೇವ್ರು ಕಡಾಯಿ ದೇವ್ರು ಆ ದೇವ್ರು ಈ ದೇವ್ರು
ಜಾಗೆ ಇಲ್ಲೆ ಕಾಲ್ ಇಸಿಕೆ; ಕೂಡಲ ಸಂಗಮ ದೇವ್ರಿಗೆ ಅಡ್ಡ ಬಿದ್ದೆ.

3
ಉಳ್ಳಯ್ಯನವು ದೇವ್ರಿಗೆ ಗುಂಡ ಕಟ್ಟಿಸುವೆ.
ನಾ ಬಡವ ನನ್ನ ಕಾಲೇ ಕಂಬ
ನನ್ನ ಮುಂಡವೇ ಗುಂಡ ರುಂಡವೇ ಕಳಸ
ಕಟ್ಟಿ ನಿಲ್ಸಿದಕ್ಕೆ ಉಟ್ಟು ಪೋಕಾಲ
ಹುಟ್ಟಿ ಬೆಳ್ದದಕ್ಕೆ ಇಲ್ಲೆ ಅಳಿಗಾಲ
ಇದಕ್ಕೆ ಕೂಡಲ ಸಂಗಮ ದೇವ್ರೆ ಸಾಕ್ಷಿ

4
ಮನೆಯೊಳಗೆ ಯಜಮಾನ ಉಟ್ರೋ, ಇಲ್ಲೆನೋ
ಮೆಟ್ಲ್‌ಲಿ ಹುಲ್ಲು ಬೆಳ್ದುಟು ಮನೆಯೊಳಗೆ ಕಸ ತುಂಬಿಟು
ಮನೆಯೊಳಗೆ ಯಜಮಾನ ಉಟ್ರೋ ಇಲ್ಲೆನೋ
ಶರೀರದೊಳಗೆ ಲೊಟ್ಟೆ ತುಂಬಿ ಮನಸಿನ ಒಳಗೆ ಆಸೆ ತುಂಬಿ
ಕೂಡಲ ಸಂಗಮ ದೇವ್ರೆ ಮನೆಯೊಳಗೆ ಯಜಮಾನ ಇಲ್ಲೆ.

5
ಕದಿಬೇಡ ಲೊಟ್ಟೆ ಹೇಳ್ಬೇಡ ಕೋಪ ಮಾಡ್ಬೇಡ
ಕೊಲ್ಲುವ ಯೋಚನೆ ಬೇಡ
ಎದುರೆದ್‌ರ್ ನಿಂದೆ ಮಾಡ್ಬೇಡ
ತನ್ನದ್ ಮಾತ್ರ ಒಳ್ಳೆದ್ ಅಂತ ಕೊಚ್ಚಿಕೊಳ್ಬೇಡ
ಇದ್ ಒಳ ಹೊರಗಿನ ಸುದ್ದದ ರೀತಿ
ಸುದ್ದವಿದ್ದಲ್ಲಿಗೆ ಬಂದವೆ ಕೂಡಲ ಸಂಗಮ ದೇವ್ರು

6
ಮಾತ್ ಇರೊಕು ಮುತ್ತಿನ ಹಾಂಗೆ
ಮಾತ್ ಇರೊಕು ಮಾಣಿಕ್ಯದ ಹಾಂಗೆ
ಹೇಳ್ದ ಮಾತ್ ಫಳಫಳ ಹೊಳಿಯೊಕು
ದೊಡ್ಡೊವು ಕೇಳಿ ಸೈಸೈ ಹೇಳೊಕು
ಆಡ್‌ದ ಮಾತ್ ನಡತೆಲಿ ಕಾಣೊಕು
ಅದೇ ಕೂಡಲಸಂಗಮ ದೇವರ ಪೂಜೆ

## ಟೆ ಟ್ಟೆ ಟ್ಟೆ

ಅಷ್ಟ್ ಕೊಟ್ಟೆ ಇಷ್ಟ್ ಕೊಟ್ಟೆ
– ಕೊಚ್ಕೊಂಡಿತ್ತ್ ಲೊಟ್ಟೆ
ಕೇಸ್ ಹತ್ತಿತ್ ಕೋರ್ಟಿನ್ಕಟ್ಟೆ
ಅಲ್ಲಿ ಅಣ್ಣ ಟೆಟ್ಟೆಟ್ಟೆ!

# ಪಾಠ

ಅದ್?
ಕಾಗೆ.
ಇದ್?
ಗೂಗೆ.
ಸಂಬಂಧ ಹೇಂಗೆ?
ಎಣ್ಣೆ ಸೀಗೆ;
ನಮ್ಮ ಹಾಂಗೆ!

# ಕತ್ತೆ ವಾಪಾಸ್ ಬಾತ್

ಕಟ್ಟ್ ಹೊತ್ತು ಕತ್ತೆ ಸುಸ್ತು.
ಕುದ್ರೆ ಆಕೂಂತ ಕಾಶಿಗ್ಹೋತ್.
ಸ್ನಾನ, ಧ್ಯಾನ ಮಾಡಿ ಆತ್.
ಅಲ್ಲಿ ಕೂಡಾ ಅದೇ ಕೆಲ್ಸ, ಅದೇ ಹೆಸ್ರ್
ಕತ್ತೆ ವಾಪಾಸ್ ಬಾತ್.

# ತಿನ್ನದ ಹಕ್ಕಿ

ಒಂದಾನೊಂದು ಕಾಲಲಿ, ಭಾರತ ದೇಶಲಿ,
ಮರದ ಮೇಲಿತ್ತ್‌ಗಡ ಹಕ್ಕಿ ಜೋಡು.
ಒಂದು ಹಕ್ಕಿ ಹಣ್ಣ ತಿಂಬೊತ್ತಿತ್ತ್ ಕುಕ್ಕಿ ಕುಕ್ಕಿ;
ತಿಂಬೊದರ ನೋಡ್ತಿತ್ತ್ ಮತ್ತೊಂದು ಹಕ್ಕಿ!

ಈಗಲೂ ಮರಗ ಹೂಬುಟ್ಟವೆ, ಹಣ್ಣ್ ಕೊಟ್ಟವೆ,
ಹಕ್ಕಿಗ ಬಂದವೆ ಹಿಂಡ್ ಹಿಂಡಾಗಿ ಮತ್ತೆ ಮತ್ತೆ
ಹಣ್ಣ್ ತಿಂದ್ ಹಾರಿಹೋದವೆ ಬಾನ ದಾರಿಲಿ.
ಕಾದ್ ನಿಂತ್ ನೋಡ್ಯೊಳೆ : ತಿನ್ನದ ಹಕ್ಕಿ ನಾಪತ್ತೆ!

ಎತ್ತ ಹೋತ್ ಪರಮ ಜ್ಞಾನಿ, ತಿನ್ನದೆ ನೋಡ್ತಿದ್ದ ಹಕ್ಕಿ?
ತಿಂಬವರ ಪಕ್ಷಕ್ಕೆ ಗುಟ್ಟಿಲಿ ಪಕ್ಷಾಂತರ ಮಾಡಿರ್ದೊ?
ಸಂಖ್ಯಾಬಲದ ಲಾಭ ಉಟ್ಟೊಂತ ಹಕ್ಕಿಗೂ ಗೊತ್ತಾಗಿರ್ದೊ?
ವಿರಾಗಿ ಕೂಡ ಹತ್ತರೊಡನೆ ಹನ್ನೊಂದಾತಾ ಗೋವಿಂದಾ!

ಕೆಳಗೆ ಅಶ್ವತ್ಥಕಟ್ಟೆಯ ಮೇಲೆ ಪೂಜೆ ಭಜನೆ ಹಾಡು;
ಮೇಲೆ ಹಣ್ಣ್ ತಿಂದ್ ಗೂಡುಕಟ್ಟಿ ಕೊಳಲ ಊದಿದೆ ಹಕ್ಕಿಜೋಡು!

# ಪಯಸ್ವಿನಿ

ನಮ್ಮೂರ್ಮೇಲೆ ಜಡಿಮಳೆ ಹೊಡ್ದರೆ
ಹೊಯ್ದ್ಹಾಂಗಿದ್ದದೆ ಧಾರೆ;
ಪಯಸ್ವಿನಿ ಉಟ್ಟದೆ ಭಾರೀ ಉದ್ದದ
ಮಣ್ಣಿನ ಬಣ್ಣದ ಸೀರೆ!

ಮಣ್ಣಿನ ಮಕ್ಕಳ ಸಾಂಕುವ ಅಯ್ಯೆಗೆ
ಮಣ್ಣಿನ ಬಣ್ಣದ ಬಟ್ಟೆಬರೆ;
ದುಡಿಯುವ ಜನಕೆ ಕೆಲ್ಸವೆ ದೇವ್ರು;
ಗದ್ದೆಗೆ ತೋಟಕೆ ಸೊಪ್ಪು ಹೊರೆ.

ಪಯಸ್ವಿನಿ ಹೊರ್ಟದ್ ಕಡಲಿನ ಕಡೆಗೆ
ತೀರ್ಸಿಕೆ ಹಿಂದಿನ ಸಾಲ;
ಮೋಡದ ಮನೆಯ ನೀರ ಖಜಾನೆ
ತುಂಬ್ಕೊಂಡಿರ್ಲಿ ಅನುಗಾಲ

ಬೇಸಿಗೆ ಬಂದರೆ ಬಿಸಿಲೇ ಬೆಂಕಿ;
ಪಯಸ್ವಿನಿ ಕುಡಿಸಿದೆ ನೀರ್;
ಜನ ದನ ಗಿಡ ಮರ ಎಲ್ಲರ ಸಾಂಕಿದೆ;
ಯಾರಿಗೂ ಬೇಡ ಬೇಜಾರ್.

# ಕಾಳಗ

ಕೋಳಿಯ ಕಾಳಗ ನಡೆವ ದಿನ
ನೋಡಿಕೆ ಸೇರ್‍ಯೊಳೊ ಊರ ಜನ

ತ್ಯಾಂಪನೊಂದು ಹುಂಜ ತಾತ್
ಬಿಳಿಯ ಬಣ್ಣ, ಕೆಂಪು ಜುಟ್ಟು;
ಸೋಂಪನೊಂದು ಹುಂಜ ತಾತ್
ಬಣ್ಣ ಕಪ್ಪು, ಜುಟ್ಟು ಕೆಂಪು.

ಈ ಕಡೇಂದ ತ್ಯಾಂಪನ ಹುಂಜ
ಬಿಳಿ ಬಣ್ಣದ ವೀರ;
ಆ ಕಡೇಂದ ಸೋಂಪನ ಹುಂಜ
ಕರಿಬಣ್ಣದ ಬಿರ್ಸ.

ಕೋಳಿಯ ಕಾಲಿಲಿ ಫಳಫಳ ಬಾಳ್;
ಯುದ್ಧದ ಗದ್ದಲ ಎದ್ದತ್ ದೂಳು

ಎಂಕ ನಾಣಿ ಸಂಕ ಸೀನ
ಸೋಂಪನೆದ್‍ರ್ ಜೂಜು ಕಟ್ಟಿ
ರಂಗ ರಾಮ ತಿಮ್ಮ ದೂಮ
ತ್ಯಾಂಪನೆದ್‍ರ್ ಜೂಜು ಕಟ್ಟಿ
ತಮ್ಮ ಹುಂಜ ಗೆಲ್ಲೋಕಂತ
ಹರಕೆ ಹೊತ್ತು ನಿಂತೊಳೊ;
ಜಯವು ಬಾವ ಹಾದಿ ಮೇಲೆ
ದೃಷ್ಟಿ ಹಾಸಿ ಕಾದೊಳೊ!

ನೆತ್ತರ ಹರಿಸಿತ್ ತ್ಯಾಂಪನ ವೀರ
ಸತ್ತತ್ ಹೋರಾಡಿ;
ನಂತರ ಸತ್ತತ್ ಸೋಂಪನ ಬಿರ್ಸ
ಎಲ್ಲರ ಮುಖ ನೋಡಿ

# ಗುಂಪು, ಸದ್ದು, ಮೌನ

ಅಕ್ಕ ಪಕ್ಕ ಕಾಗೆ ಬಳಗ
ಸದ್ದ್ ಮಾಡ್‌ತಿತ್ತ್;
ದೂರದಲ್ಲಿ ಕೋಗಿಲಕ್ಕ
ಕದ್ದ್ ಕೇಳ್‌ತಿತ್ತ್.

'ಇಂದ್ ಮಜಾ ಅದುವೆ ನಿಜಾ'
ಗುಂಪು ಕುಣಿಯೋತಿತ್ತ್;
'ಕಣ್ಣು ಕಂಡುದಷ್ಟೆ ಸಾಕ್'
ಹಾಡ್ ಗುಡುಗ್‌ತಿತ್ತ್;
'ಬೇರೆ ಚಿಂತೆ ಯಾಕೆ ಬೇಕು?'
ಕಾಗೆ ಹಾಡ್‌ತಿತ್ತ್.

'ನಾವು ಕೊಟ್ಟರುಟ್ಟು ಹಕ್ಕು'
ದರ್ಪ ಉಬ್ಬುತಿತ್ತ್;
'ನಮ್ಮದಯ್ಯ ಗಟ್ಟಿ ಕೊಕ್ಕು'
ಹೆಮ್ಮೆ ಚಿಮ್ಮುತಿತ್ತ್;
ಕೇಳಿ, ನೋಡಿ, ಕೋಗಿಲಕ್ಕ
ಹೆದ್ರಿ ಸುಮ್ಮಂಗಿತ್ತ್.

'ಎಲ್ಲಿ ನಮ್ಮ ಗೀತರತ್ನ?'
ಹದ್ದು ಕೇಳ್‌ತಿತ್ತ್;
ಹದ್ದಿನೆದ್ರ್ ಕಾಗೆ ಬಗ್ಗಿ
ಅರಿಕೆ ಮಾಡ್‌ತಿತ್ತ್;
'ಹಳೆಯ ರಾಗ ನಾವ್ಗೆ ಬೇಡ'
ಗುಂಪು ಕಿರಿಚುತಿತ್ತ್.

ಕೊಂಬೆ ಮೇಲೆ ಕೋಗಿಲಕ್ಕ
ಇಣ್ಕಿ ನೋಡ್‌ತಿತ್ತ್;
ತಿಂದ್ ಕುಡ್ದ್ ಕೊಬ್ಬಿದವ್ರ
ಮಾತಿಗಂಜುತಿತ್ತ್;
'ಹಾಡ್ ನನ್ನ ಹುಟ್ಟು ಕಸುಬು'
ಮೌನ ಹೇಳ್‌ತಿತ್ತ್!

# ಮೇ ತಿಂಗಳ ಮಳೆ

ಕಳ್ದ ಇರ್ಳ್ ಮಳೆ ಹೊಡ್ದ್ ಮರ ಗಿಡದ ಮೈ ತೊಳ್ದ್
ನೆಲಗುಡ್ಸಿ ಹೋಗಿತ್ತ್ ತಂಪನುಳ್ಸಿ;
ಮೋಡ ಕಪ್ಪಾಗಿ ಮತ್ತೆ ಕೂಡ್ವಾಂಗುಟ್ಟು;
ತಂಪು ತಂಪಾಗುಟ್ಟು ಗಾಳಿ ಬೀಸಿ.

ಪುರುಳಿ ಹಕ್ಕಿಗ ಕೊಳಲ ಊದುವೆ
ಗಿಡದ ಬೆರಳ ಮೇಲೆ;
ತಂಪು ಗಾಳಿಲಿ ತೇಲಿ ಬಂದದೆ
ಇಂಪು ರಾಗಮಾಲೆ!

ಹಳದಿ ಹಕ್ಕಿಗೆ ಹಾರುವ ಸಡಗರ
ಬಣ್ಣಕೆ ಜೀವ ಬಂದ್ವಾಂಗುಟ್ಟು;
ಕೆಂಪಿನ ಕೊಕ್ಕು ಮಿಂಚುತ ಉಟ್ಟು;
ಕಣ್ಣಿನ ಸುತ್ತು ಉಂಗುರ ಕಪ್ಪು
ಇಸಿದಾಂಗುಟ್ಟು ಕಾಡಿಗೆ ಬೊಟ್ಟು!

ಬೇಲಿಯ ಮೇಲೆ ದನಿಯೆತ್ತಿ ಹಾಡ್ದೆ
ಬೆಳ್ಳರ ಮಾಣಿಕ ಹಕ್ಕಿ;
ರೆಕ್ಕೆಲಿ ಬಿಳಿಗೆರೆ, ಬೆನ್ನಿಲಿ ಕರಿಗೆರೆ
ಎದೆ ಮೇಲೆ ಕರಿಬಿಳಿ ಚುಕ್ಕಿ.

ನೆಲಕಿನ್ನ್ ಹಸಿರುಡಿಗೆ, ಗಾಳಿ ಮೋಡದ ಕೊಡುಗೆ
ಉರಿಬಿಸಿಲ್ ಅಲ್ಲಲ್ಲಿ ಅಡಗಿದಾಂಗುಟ್ಟು
ಬಂಡೆಕಲ್ಲಿನ ಮೇಲೆ ಬೆಂಕಿ ತಣ್ಣಂಗೆ ಮಲಗಿ,
ಇದ್ದ್ ಇಲ್ಲದ ಹಾಂಗೆ ಮಾಡ್ದೆ ಗುಟ್ಟು!

# ದೇವರ ದಯೆ

ಮುಳ್ಳ ಕೊಡಿಲಿ ಮೂರು ಕೆರೆ ಕಡ್ಡಿದೊ
ಎರಡ್ ಖಾಲಿ ಒಂದು ತುಂಬಿತೇ ಇಲ್ಲೆ.

ತುಂಬದ ಕೆರೆಗೆ ಬಂದೊ ಮೂವರೊಡ್ಡರ್
ಇಬ್ಬರ್ ಅಂದಗರ್ ಒಬ್ಬಂಗೆ ಕಾಲೇ ಇಲ್ಲೆ

ಕಾಲಿಲ್ಲದ ಒಡ್ಡಂಗೆ ಕೊಟ್ಟೊ ಮೂರು ಎಮ್ಮೆಗಳ
ಎರಡ್ ಗೊಡ್ಡು ಒಂದಕೆ ಕರುನೇ ಇಲ್ಲೆ

ಕರ್ ಇಲ್ಲದ ಎಮ್ಮೆಗೆ ಬಂದೊ ಮೂವರ್ ಗಿರಾಕಿಗ
ಇಬ್ಬರ್ ಕುರ್ಡರ್ ಒಬ್ಬಂಗೇ ಕಣ್ಣೇ ಇಲ್ಲೆ.

ಕಣ್ಣಿಲ್ಲದ ಗಿರಾಕಿಗೆ ಕೊಟ್ಟೊ ಮೂರು ಊರು
ಎರಡ್ ಹಡಿಲ್ ಒಂದರ್ಲಿ ಒಕ್ಕಲೇ ಇಲ್ಲೆ.

ಒಕ್ಕಲಿಲ್ಲದ ಊರಿಗೆ ಬಂದೊ ಮೂವರ್ ಕುಂಬಾರರ್
ಇಬ್ಬರ್ ಚೊಂಚರ್ ಮತ್ತೊಬ್ಬಂಗೆ ಕೈಯೇ ಇಲ್ಲೆ

ಕೈ ಇಲ್ಲದ ಕುಂಬಾರ ಮಾಡ್ತ್ ಮೂರು ಮಡಕೆ
ಎರಡ್ ಒಡಕ್ ಮತ್ತೊಂದಕೆ ಅಡಿಯೇ ಇಲ್ಲೆ.

ಅಡಿ ಇಲ್ಲದ ಮಡಕೆಗೆ ಹಾಕಿದೊ ಮೂರು ಅಕ್ಕಿ ಕಾಳ್
ಎರಡ್ ಹಾಂಗೇ ಒಳ್ತ್ ಮತ್ತೊಂದು ಬೇತೇ ಇಲ್ಲೆ

ಬೇಯದ ಅಕ್ಕಿಗೆ ಮೂರು ಜನ ನೆಂಟ್ರ್ ಬಂದೊ
ಇಬ್ಬರ್ ಊಟ ಮಾಡ್ತಿಲ್ಲೆ ಮತ್ತೊಬ್ಬಂಗೆ ಹಸಿವೇ ಇಲ್ಲೆ.

ಹಸಿವಿಲ್ಲದ ನಂಟಂಗೆ ಬೀಸಿ ಮೂರು ಗುದ್ದು ಹಾಕಿದೊ;
ಎರಡ್ ತಪ್ಪಿ ಹೋತ್ ಮತ್ತೊಂದು ತಾಂಗಿತೇ ಇಲ್ಲೆ.

ತಾಂಗದ ಗುದ್ದುಗಳ ತಾಂಗಿಸಿ ಸದ್ಗತೀನ
ಕೊಡೋಂವ ಪುರಂದರ ವಿಠಲ ಸ್ವಾಮಿ

**(ಮೂಲ : ಪುರಂದರ ದಾಸರ ಹಾಡು)**

# ನೋಡಿ ನನ್ನ ಚೀಲ

ಓಟದಲ್ಲಿ ಮೊಲವೆ ಮುಂದೆ
ನೋಡಿ ನನ್ನ ಚೀಲ;
ಮೊಲಕೆ ದೊಡ್ಡ ಕಿವಿಗಳೆರಡ್
ಉಟ್ಟು ಮೋಟು ಬಾಲ!

ಆಮೆ ಜತೆಗೆ ಪಂತ ಕಟ್ಟಿ,
ಬೇಗ ಓಡಿ, ನಿದ್ದೆ ಮಾಡಿ
ಸೋತು ಹೋತು ಹಿಂದೆ!
ಸೋಲಿನಿಂದ ಪಾಠ ಕಲ್ತ್
ಸೋತದ್ದಿಲ್ಲೆ ಮುಂದೆ.

ಕೂಡಿ ಆಡಿ ಓದಿ ಬರ್ದ್
ಕಲ್ತ್ ಬನ್ನೆ ಹಿಂಬೊತ್ತು;
ಕಾಯ್ತು ಉಟ್ಟು ಕ್ಲಾಸ್ಮೇಟು,
ಗಂಟೆ ಆತ್ ಒಂಬತ್ತು!



ಒಳದನಿ, ಪರಸ್ಪರ, ಲಬ್ಧ, ಅಟ್ಟದಲ್ಲಿ
ಒಂದು ರಾತ್ರಿ, ದ್ವೀಪದಲ್ಲಿ ದ್ವಿಪದಿ,
ಏಕಾಂಗಿಯ ಅನೇಕತೆ, ಮರದ ಎದುರು
ಪಾಮರ – ಇವು ಕನ್ನಡಲಿ ಬರ್ದ
ಕವನ ಸಂಕಲನಗ. ನೋಟ ಇವರ
ಲೇಖನಗಳ ಸಂಕಲನ. ಸುವರ್ಣ
ಸಂಪಿಗೆ ನಡೆದ ದಾರಿಯ ನೆನಪುಗಳು
ಪುಸ್ತಕಗಳ ಸಂಪಾದಕರಾಗಿದ್ದೊ ಯಾಕೀ
ಕತೆ ಹೀಂಗಾತ್ ಇವರ ಅರೆಬಾಸೆಯ
ಕೃತಿ. ಮಂಗಳೂರು ವಿಶ್ವವಿದ್ಯಾನಿಲಯ,
ತಮಿಳುನಾಡು ಸರಕಾರದ ಕನ್ನಡ
ಪಠ್ಯಪುಸ್ತಕಲಿ ಇವರ ಕವಿತೆಗಳಿಗೆ
ಸ್ಥಾನಮಾನ ಸಿಕ್ಕಿಟು. ಇಂಗ್ಲಿಷ್,
ಹಿಂದಿ, ತೆಲುಗು ಭಾಷೆಗೆ ಇವರ ಕವಿತೆ
ತರ್ಜುಮೆ ಆಗಿ ಪ್ರಕಟ ಆಗುಟು.
ಇವರ ಕವಿತೆಗೆ ಭಾರತ ಸರಕಾರದ
ಪರಿಸರ ಇಲಾಖೆಯ ಬಹುಮಾನ
ಬಂದುಟು. ಕರ್ನಾಟಕದ ಹೆಚ್ಚಿನ ಎಲ್ಲಾ
ಪತ್ರಿಕೆಗ ಇವರ ಬರಹಗಳ ಪ್ರಕಟಿಸಿ
ಗೌರವಿಸಿಯೊಳೊ. ಆಕಾಶವಾಣಿಲಿ
ಕವಿತೆ, ಚಿಂತನೆ ಪ್ರಸಾರ ಆಗುಟು.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ

ರೂ. 45